# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2372

ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 29.03.2021

ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ ಎಷ್ಟು ಸ್ಥಳಗಳನ್ನು ಪ್ರವಾಸಿ ತಾಣಗಳಾಗಿ ಗುರುತಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಒಟ್ಟು 14 ಸ್ಥಳಗಳನ್ನು ಪ್ರವಾಸಿ ತಾಣಗಳಾಗಿ ಗುರುತಿಸಲಾಗಿದೆ. ಪ್ರವಾಸೋದ್ಯಮ ಇಲಾಖೆಯಿಂದ ಗುರುತಿಸಿರುವ ತಾಲ್ಲೂಕುವಾರು ಪ್ರವಾಸಿ ತಾಣಗಳ ವಿವರ ಈ ಕೆಳಗಿನಂತಿದೆ.<br>ಮಡಿಕೇರಿ: ಮಡಿಕೇರಿ, ಅಬ್ಬಿ ಜಲಪಾತ, ತಲಕಾವೇರಿ, ನಾಲ್ಕುನಾಡು ಅರಮನೆ, ಭಾಗಮಂಡಲ, ಓಂಕಾರೇಶ್ವರ ದೇವಸ್ಥಾನ, ಕಕ್ಕಬ್ಬೆ ಶ್ರೀ ಇಗ್ಗುತಪ್ಪ.<br>ಸೋಮವಾರಪೇಟೆ: ಕಾವೇರಿ ನಿಸರ್ಗಧಾಮ, ಹಾರಂಗಿ ಅಣೆಕಟ್ಟು, ಕೂಡಿಗೆ, ಚಟ್ಟಳ್ಳಿ ಕೃಷಿಕ್ಷೇತ್ರ<br>ವಿರಾಜಪೇಟೆ: ನಾಗರಹೊಳೆ ರಾಷ್ಟ್ರೀಯ ಉದ್ಯಾನವನ, ಇರ್ಪು ಜಲಪಾತ, ಕುಂದದ ಬೆಟ್ಟ. |
| ಆ) | ಸದರಿ ಪ್ರವಾಸಿ ತಾಣಗಳಲ್ಲಿ ಅತ್ಯಗತ್ಯವಿರುವ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗಿದೆಯೇ; | ಪ್ರವಾಸೋದ್ಯಮ ಇಲಾಖೆಗೆ ಆಯವ್ಯಯದಲ್ಲಿ ಒದಗಿಸುವ ಅನುದಾನ ಮತ್ತು ಅಗತ್ಯತೆಗೆ ಅನುಗುಣವಾಗಿ ಹಂತ ಹಂತವಾಗಿ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗುತ್ತಿದೆ. |
| ಇ) | ಜಿಲ್ಲೆಯ ಸಾಕಷ್ಟು ಪ್ರವಾಸಿ ತಾಣಗಳಲ್ಲಿ ಇನ್ನೂ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರವಾಸಿ ತಾಣವಾರು ಮೂಲಸೌಕರ್ಯ ಕೊರತೆ ಸಮೀಕ್ಷೆ ಕೈಗೊಳ್ಳಲಾಗಿರುವುದಿಲ್ಲ. ಆದಾಗ್ಯೂ, ಜಿಲ್ಲೆಯ ಶಾಸಕರು / ಜನಪ್ರತಿನಿಧಿಗಳು / ಜಿಲ್ಲಾಧಿಕಾರಿಗಳು ಹಾಗೂ ಸಂಘ ಸಂಸ್ಥೆಗಳಿಂದ ಸ್ವೀಕೃತವಾಗುವ ಪ್ರವಾಸಿ ಮೂಲಸೌಕರ್ಯ ಅಭಿವೃದ್ಧಿ ಪ್ರಸ್ತಾವನೆಗಳನ್ನು ಪರಿಶೀಲಿಸಿ ಅನುದಾನ ಲಭ್ಯತೆಗೆ ಅನುಗುಣವಾಗಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |
| ಈ) | ಬಂದಿದ್ದಲ್ಲಿ, ಪ್ರತಿಯೊಂದು ಪ್ರವಾಸಿ ತಾಣದಲ್ಲಿ ಇರುವ ಸೌಲಭ್ಯಗಳ ಕೊರತೆಗಳು ಯಾವುವು; ಅವುಗಳನ್ನು ಕಲ್ಪಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು /ವಿನಿಯೋಗಿಸುತ್ತಿರುವ ಅನುದಾನದ ವಿವರಗಳೇನು? | ಕೊಡಗು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಕೈಗೊಳ್ಳುತ್ತಿರುವ ಪ್ರವಾಸಿ ಮೂಲಭೂತ ಸೌಕರ್ಯಗಳ ತಾಲ್ಲೂಕುವಾರು ಕಾಮಗಾರಿಗಳು ಮತ್ತು ಅನುದಾನದ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |

ಸಂಖ್ಯೆ: ಟಿಒಆರ್ 111 ಟಿಡಿವಿ 2021.

Yogeshwar

(ಸಿ.ಪಿ. ಯೋಗೇಶ್ವರ)
ಪ್ರವಾಸೋದ್ಯಮ,
ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು.

# ಅನುಬಂಧ

## ಕೊಡಗು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ತಾಣಗಳ ಅಭಿವೃದ್ಧಿಗೆ ಬಿಡುಗಡೆ ಮಾಡಿರುವ ಅನುದಾನದ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| | **ಕೊಡಗು ಜಿಲ್ಲೆ** | | | | |
| | **ಮಡಿಕೇರಿ ತಾಲ್ಲೂಕು** | | | | |
| 1 | ಮಡಿಕೇರಿಯಲ್ಲಿ ಕೊಡವ ಹೆರಿಟೇಜ್ ಸೆಂಟರ್ ನಿರ್ಮಾಣ (ವಾಚ್ ಟವರ್ ಕಮ್ ವಾಟರ್ ಟ್ಯಾಂಕ್, ಬಯಲು ರಂಗಮಂದಿರ, ಅಡಿಗೆಮನೆ, ಅಂಗಡಿ ಮಳಿಗೆ, ದೊಡ್ಡ ಹಾಲ, ಲೈಬ್ರರಿ ಕೊಠಡಿ, ಪಾರ್ಕಿಂಗ್, ಡಿಸ್ ಪ್ಲೇ ಏರಿಯಾ ಇತ್ಯಾದಿ ಸೌಲಭ್ಯಗಳ ಅಭಿವೃದ್ಧಿ | 2008-09 | 268.04 | ಲೋಕೋಪಯೋಗಿ ಇಲಾಖೆ | 253.54 |
| 2 | ಮಡಿಕೇರಿಯ ರಾಜಾಸೀಟ್ ಪ್ರದೇಶವನ್ನು ಸಮಗ್ರವಾಗಿ ಅಭಿವೃದ್ಧಿಪಡಿಸುವ ಯೋಜನೆ | 2014-15 | 455.00 | ಲೋಕೋಪಯೋಗಿ ಇಲಾಖೆ | 341.25 |
| 3 | ಕೊಡಗು ಜಿಲ್ಲೆಯ ಕೆಂಪುರಾಶಿ ಮೊಟ್ಟೆಯಿಂದ ಮಂಟಕಲ್ ಶಾಲೆವರೆಗೆ 2.00 ಕಿ.ಮೀ. ರಸ್ತೆ ಅಭಿವೃದ್ಧಿ (ತಲಕಾವೇರಿ ಬದಲಿ ಸಂಪರ್ಕ ರಸ್ತೆ) (20 ಪ್ರವಾಸಿ ತಾಣಗಳ ಅಭಿವೃದ್ಧಿ ಕೂಡುರಸ್ತೆ ಕಾಮಗಾರಿ) | 2017-18 | 300.00 | ಲೋಕೋಪಯೋಗಿ ಇಲಾಖೆ | 225.00 |
| 4 | ಮಡಿಕೇರಿಯಲ್ಲಿರುವ ಶ್ರೀ ಓಂಕಾರೇಶ್ವರ ದೇವಸ್ಥಾನ ಬಳಿ ಶೌಚಾಲಯ ಬಟ್ಟೆ ಬದಲಿಸುವ ಕೊಠಡಿ ನಿರ್ಮಾಣ. | 2018-19 | 36.60 | ಕೆಆರ್ ಐಡಿಎಲ್ | 27.45 |
| 5 | ಮಡಿಕೇರಿ ತಾಲ್ಲೂಕಿನ ನಾಲ್ಕುನಾಡು ಅರಮನೆಗೆ ಸಂಪರ್ಕ ರಸ್ತೆ ಅಭಿವೃದ್ಧಿ (ಸಿ.ಸಿ.ರಸ್ತೆ) (ತಿದ್ದುಪಡಿ ಆದೇಶ ಸಂಖ್ಯೆ:ಪ್ರಇ/336/ ಪ್ರವಾಯೋ/2018ದಿನಾಂಕ: 26/12/2018) | 2018-19 | 300.00 | ಲೋಕೋಪಯೋಗಿ ಇಲಾಖೆ | 225.00 |
| 6 | ಕೊಡಗು ಜಿಲ್ಲೆಯ ಮಡಿಕೇರಿ ಜನರಲ್ ತಿಮ್ಮಯ್ಯ ಸ್ಮಾರಕ ಭವನ ನವೀಕರಣ ಸಂಬಂಧ ಅಗತ್ಯ ಕಾಮಗಾರಿಗಳು.(2019-20) | 2019-20 ಕೆಟಿಐಜಿ | 143.00 | ಜಿಲ್ಲಾ ನಿರ್ಮಿತಿ ಕೇಂದ್ರ, ಕೊಡಗು | 47.00 |

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ |
|---|---|---|---|---|---|
| 7 | ಮಡಿಕೇರಿಯ ಶ್ರೀ ಓಂಕಾರೇಶ್ವರ ದೇವಸ್ಥಾನದ ಬಳಿ 100 ಮೀಟರ್ ಸಿ.ಸಿ. ರಸ್ತೆ ನಿರ್ಮಾಣ ಮತ್ತು ಪಾರ್ಕಿಂಗ್ ಲಾಟ್ ಅಭಿವೃದ್ಧಿ. | 2019-20 ಕೆಟಿವಿಜಿ | 40.80 | ಕೆಆರ್ ಐಡಿಎಲ್ | 20.00 |
| 8 | ಮಡಿಕೇರಿಯ ರಾಜಾಸೀಟಿಗೆ ತೆರಳುವ ರಸ್ತೆಗೆ ಪಾತ್‌ವೇ, ರೈಲಿಂಗ್ಸ್ ನಿರ್ಮಾಣ ಕಾಮಗಾರಿ. | 2019-20 ಕೆಟಿವಿಜಿ | 57.00 | ಲೋಕೋಪಯೋಗಿ ಇಲಾಖೆ | 28.00 |
| 9 | ಮಡಿಕೇರಿಯ ರಾಜಾಸೀಟು ಬಳಿ ಕೂರ್ಗ್ ವಿಲೇಜ್ / ಕೊಡಗು ಶಾಪಿಂಗ್ ಕೇಂದ್ರ ಕಾಮಗಾರಿ ನಿರ್ಮಾಣ. | 2019-20 ಕೆಟಿವಿಜಿ | 98.50 | ಕೊಡಗು ನಿರ್ಮಿತಿ ಕೇಂದ್ರ | 90.00 |
| 10 | ಕೊಡಗು ಜಿಲ್ಲೆಯ ಅಬ್ಬಿ ಫಾಲ್ಸ್ ಪ್ರದೇಶದಲ್ಲಿ 300 ಮೀ. ಸಿ.ಸಿ. ರಸ್ತೆ, ಪಾರ್ಕಿಂಗ್ ಸೌಲಭ್ಯ ಹಾಗೂ ಮಳೆನೀರು ಚರಂಡಿ ನಿರ್ಮಾಣ | 2019-20 ಕೆಟಿವಿಜಿ | 174.13 | ಕೆಆರ್ ಐಡಿಎಲ್ | 130.00 |
| | **ಮಡಿಕೇರಿ ತಾಲ್ಲೂಕಿನ ಒಟ್ಟು ಮೊತ್ತ** | | 1873.07 | | 1387.24 |
| | **ಸೋಮವಾರಪೇಟೆ ತಾಲ್ಲೂಕು** | | | | |
| 11 | ಸೋಮವಾರಪೇಟೆ ತಾಲ್ಲೂಕಿನ ದುಬಾರೆಯ ಬಳಿ ಕಾವೇರಿ ನದಿ ತೀರದ ಬಳಿ ಪಾರ್ಕಿಂಗ್ ಸೌಲಭ್ಯ ಅಭಿವೃದ್ಧಿ | 2016-17 | 102.00 | ಲೋಕೋಪಯೋಗಿ ಇಲಾಖೆ | 76.50 |
| 12 | ಸೋಮವಾರಪೇಟೆ ತಾಲ್ಲೂಕು, ಮಲ್ಲಳ್ಳಿ ಜಲಪಾತ ಪ್ರದೇಶದಲ್ಲಿ ಬಾಕಿ ಇರುವ ಮೆಟ್ಟಿಲುಗಳ ನಿರ್ಮಾಣ, ರೈಲಿಂಗ್ಸ್, ಪಾರ್ಕಿಂಗ್, ಮಳಿಗೆ ಮುಂತಾದ ಸೌಲಭ್ಯಗಳ ನಿರ್ಮಾಣ | 2016-17 | 192.92 | ಕೆಆರ್ ಐಡಿಎಲ್ | 160.00 |
| 13 | ಸೋಮವಾರಪೇಟೆ ತಾಲ್ಲೂಕು, ಶನಿವಾರಸಂತೆ ಹೋಬಳಿ, ತಪ್ಪೋವನ ಮನೆಹಳ್ಳಿ ಶ್ರೀ ಕಾಡುಮಲ್ಲೇಶ್ವರ ದೇವಸ್ಥಾನದಿಂದ ಅಜ್ಜಯ್ಯ ವೀರಭದ್ರ ಮಠಕ್ಕೆ ಹೋಗುವ ರಸ್ತೆ ಅಭಿವೃದ್ಧಿ. | 2019-20 | 100.00 | ಪ್ರವಾಸೋದ್ಯಮ/ ಕೆಟಿಐಎಲ್ | 33.00 |
| 14 | ಕುಶಾಲನಗರದ ದುಬಾರೆಯಲ್ಲಿ ಪಾರ್ಕಿಂಗ್ ವ್ಯವಸ್ಥೆ ನಿರ್ಮಾಣ (ಭಾಗ-2). | 2019-20 ಕೆಟಿವಿಜಿ | 130.00 | ಲೋಕೋಪಯೋಗಿ ಇಲಾಖೆ | 65.00 |
| 15 | ಕುಶಾಲನಗರದ ದುಬಾರೆಯಲ್ಲಿ ಕಾವೇರಿ ನದಿ ಬಳಿ ಸೋಪಾನಕಟ್ಟೆ ಹಾಗೂ ಜಟ್ಟಿ ನಿರ್ಮಾಣ. | 2019-20 ಕೆಟಿವಿಜಿ | 173.70 | ಲೋಕೋಪಯೋಗಿ ಇಲಾಖೆ | 87.00 |

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ |
|---|---|---|---|---|---|
| 16 | ಕೊಡಗು ಜಿಲ್ಲೆಯ ಮಾಂದಲಪಟ್ಟಿಯಲ್ಲಿ ಸಿ.ಸಿ. ರಸ್ತೆ, ಮೆಟ್ಟಿಲು ಮತ್ತು ರೈಲಿಂಗ್ಸ್ ಅಳವಡಿಸುವ ಕಾಮಗಾರಿ (ಕಿ.ಮೀ. 0.00 ರಿಂದ 0.940) | 2019-20 ಕೆಟಿವಿಜಿ | 200.00 | ಕೆಆರ್ ಐಡಿಎಲ್ | 150.00 |
| | **ಸೋಮವಾರಪೇಟೆ ತಾಲ್ಲೂಕಿನ ಒಟ್ಟು ಮೊತ್ತ** | | 898.62 | | 571.50 |
| | **ವಿರಾಜಪೇಟೆ ತಾಲ್ಲೂಕು** | | | | |
| 17 | ಕೊಡಗು ಜಿಲ್ಲೆಯ ವಿರಾಜಪೇಟೆಯ ಅಯ್ಯಪ್ಪ ಬೆಟ್ಟದಲ್ಲಿ ಪಾರ್ಕಿಂಗ್, ಬಟರ್ ಫ್ಲೈ ಪಾರ್ಕ್ ಹಾಗೂ ಇತರ ಮೂಲಭೂತ ಸೌಕರ್ಯ ಕಾಮಗಾರಿ. | 2019-20 ಕೆಟಿವಿಜಿ | 199.00 | ಕೆಆರ್ ಐಡಿಎಲ್ | 149.00 |
| | **ವಿರಾಜಪೇಟೆ ತಾಲ್ಲೂಕಿನ ಒಟ್ಟು ಮೊತ್ತ** | | 199.00 | | 149.00 |
| | **ಕೊಡಗು ಜಿಲ್ಲೆಯ ಒಟ್ಟು ಮೊತ್ತ** | | 2970.69 | | 2107.74 |

ಜಂಟಿ ಆಯುಕ್ತರು
ಪ್ರವಾಸೋದ್ಯಮ ಇಲಾಖೆ